ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಸಮಾಜದ ಕೆಳವರ್ಗದ ಸಮುದಾಯಗಳಿಗೆ ಉನ್ನತ ಶಿಕ್ಷಣದ ಲಭ್ಯತೆ ಬಗ್ಗೆ

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು):-

137 (92) ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಖಾಸಗಿ ಶಿಕ್ಷಣ ಸಂಸ್ಥೆಗಳು ಸಮಾಜದ ಕೆಲವೇ ವರ್ಗಗಳ ಮತ್ತು ಸಮುದಾಯಗಳ ಹಿಡಿತದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಸಮಾಜದ ಕೆಳವರ್ಗದ ಸಮುದಾಯಗಳಿಗೆ ಉನ್ನತ ಶಿಕ್ಷಣ ದೊರಕಬೇಕೆಂದರೆ ಕ್ಯಾಪಿಟೇಷನ್ ನಿರ್ಮೂಲನೆ ಹಾಗೂ ಈ ಸಮುದಾಯದ ಕೈಗೆ ಎಟುಕುವ ಬೋಧನಾ ಶುಲ್ಕ ದೊರೆತರೆ, ಈ ಸಮುದಾಯಗಳು ಉನ್ನತ ಶಿಕ್ಷಣ ಪಡೆಯಲು ಸಹಕಾರಿಯಾಗುವುದು ಎನ್ನುವುದು ನಿಜವಲ್ಲವೇ;

(ಇ) ಹಾಗಿದ್ದರೆ, ರಾಜ್ಯ ಸರ್ಕಾರ ರಾಜ್ಯ ಶಿಕ್ಷಣ ಹಣಕಾಸು ಸಂಸ್ಥೆಯೊಂದನ್ನು ಸ್ಥಾಪಿಸಿ, ಶಿಕ್ಷಣ ತಜ್ಞರು, ಸಮಾಜ ಸುಧಾರಕರು ಮತ್ತು ಸೇವಾ ಸಂಸ್ಥೆಗಳು ಹಾಗೂ ಇತರರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲು ಮತ್ತು ಉನ್ನತ ಶಿಕ್ಷಣ ಪಡೆಯಬಯಸುವ ವಿದ್ಯಾರ್ಥಿಗಳಿಗೆ ಸರಳ ಬಡ್ಡಿ ದರದಲ್ಲಿ ಮತ್ತು ಸಾಲ ನೀಡುವಲ್ಲಿ ಕ್ಲಿಷ್ಟಕರ ನಿಬಂಧನೆಗಳು ಇಲ್ಲದೆ ಮಂಜೂರು ಮಾಡುವ ಸಂಸ್ಥೆಯೊಂದನ್ನು ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; ಇಲ್ಲದಿದ್ದಲ್ಲಿ, ಇಂತಹ ರಾಜ್ಯ ಶಿಕ್ಷಣ ಹಣಕಾಸು ಸಂಸ್ಥೆಯನ್ನು ಸ್ಥಾಪಿಸಲು ರಾಜ್ಯ ಸರ್ಕಾರ ಮುಂದಾಗುವುದೇ? (ಮಾಹಿತಿ ನೀಡುವುದು)